# ಕರ್ನಾಟಕ ವಿಧಾನ ಪರಿಷತ್ತು

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1265
ಸದಸ್ಯರ ಹೆಸರು : ಶ್ರೀ ಸಿ.ಎಂ. ಲಿಂಗಪ್ಪ
(ನಾಮನಿರ್ದೇಶನ ಹೊಂದಿದವರು)
ಉತ್ತರಿಸುವ ದಿನಾಂಕ : 17–03–2021
ಉತ್ತರಿಸುವ ಸಚಿವರು : ಕಂದಾಯ ಸಚಿವರು

| ಕ್ರ .ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | 2004ರಲ್ಲಿ ಸ್ಥಗಿತವಾದಂತಹ ಅನಧಿಕೃತ ಸಾಗುವಳಿ ಜಮೀನುಗಳನ್ನು ಸಕ್ರಮಗೊಳಿಸುವ ಪ್ರಕ್ರಿಯೆಯು ಈ ತಹಲ್‌ವರೆಗೂ ನಿಂತು ಹೋಗಿದ್ದು, ಇತ್ಯರ್ಥವಾಗದೇ ಇನ್ನು ಉಳಿದಿರುವ ಅರ್ಜಿಗಳನ್ನು ವಿಲೇ ಮಾಡುವ ಕುರಿತು ಸರ್ಕಾರದ ಕ್ರಮಗಳೇನು; | ಸರ್ಕಾರಿ ಜಮೀನುಗಳಲ್ಲಿನ ಅನಧಿಕೃತ ಸಾಗುವಳಿಯನ್ನು ಸಕ್ರಮೀಕರಣಗೊಳಿಸಲು ಕರ್ನಾಟಕ ಭೂ ಕಂದಾಯ ಕಾಯ್ದೆ, 1964ರ ಕಲಂ 94–ಎ ಮತ್ತು 94–ಬಿ ರಡಿಯಲ್ಲಿ ನಮೂನೆ–50 ಮತ್ತು ನಮೂನೆ–53ರಲ್ಲಿ ಸ್ವೀಕರಿಸಿರುವ ಅರ್ಜಿಗಳನ್ನು ವಿಲೇವಾರಿ ಮಾಡಲು ಕರ್ನಾಟಕ ಭೂ ಕಂದಾಯ ಕಾಯ್ದೆ, 1964 ಕಲಂ 94ಬಿ(iii) ಗೆ ತಿದ್ದುಪಡಿ ತಂದು ಕಾಲಕಾಲಕ್ಕೆ ಅವಧಿಯನ್ನು ವಿಸ್ತರಿಸಿ ಅಧಿಸೂಚನೆಗಳನ್ನು ಹೊರಡಿಸಲಾಗಿರುತ್ತದೆ.<br>ಬಾಕಿ ಇರುವ ಎಲ್ಲಾ ಅರ್ಜಿಗಳನ್ನು ಇತ್ಯರ್ಥಪಡಿಸಲು ದಿನಾಂಕ:26.04.2022 ರವರೆಗೆ ಕಾಲಾವಕಾಶವನ್ನು ವಿಸ್ತರಿಸಲಾಗಿದೆ.<br>ಮುಂದುವರೆದು, ಸರ್ಕಾರದ ಸುತ್ತೋಲೆ ಸಂಖ್ಯೆ:ಆರ್‌ಡಿ 02 ಎಲ್‌ಜಿಪಿ 2021; ದಿ: 30.01.2021 ರ ಸುತ್ತೋಲೆಯಲ್ಲಿ ಬಾಕಿ ಇರುವ ಎಲ್ಲಾ ಅರ್ಜಿಗಳನ್ನು ಶೀಘ್ರವಾಗಿ ಇತ್ಯರ್ಥಪಡಿಸುವಂತೆ ಎಲ್ಲಾ ಜಿಲ್ಲಾಧಿಕಾರಿಗಳಿಗೆ ಕಟ್ಟುನಿಟ್ಟಿನ ಸೂಚನೆಗಳನ್ನು ನೀಡಲಾಗಿದೆ. |
| ಆ) | ರಾಜ್ಯದ ಯಾವ ಯಾವ ತಾಲ್ಲೂಕುಗಳಲ್ಲಿ ಸಕ್ರಮಗೊಳಿಸುವ ಕಾರ್ಯ ಪ್ರಗತಿಯಲ್ಲಿದೆ; | ಕರ್ನಾಟಕ ಭೂ ಕಂದಾಯ ಕಾಯ್ದೆ, 1964ರ ಕಲಂ 94–ಎ ರ ಪ್ರಕಾರ ಆಯಾ ವಿಧಾನಸಭಾ ಕ್ಷೇತ್ರವಾರು ಬಗರ್ ಹುಕುಂ ಸಮಿತಿ ರಚಿಸಲು ಅವಕಾಶವಿದ್ದು, ಅದರಂತೆ ಒಟ್ಟು 135 ಬಗರ್‌ಹುಕುಂ ಸಮಿತಿಗಳನ್ನು ರಚಿಸಲಾಗಿದ್ದು, ಸದರಿ ಸಮಿತಿಗಳು ಕಾರ್ಯನಿರ್ವಹಿಸುತ್ತಿವೆ. |
| ಇ) | ಕೆಲವು ತಾಲ್ಲೂಕುಗಳಲ್ಲಿ ಶಾಸಕರ ಅನಾದರಣೆಯಿಂದ ಸಕ್ರಮಗೊಳಿಸುವ ಕಾರ್ಯಚಾಲನೆಗೊಳ್ಳದಿರುವ ಸಂದರ್ಭದಲ್ಲಿ ಸರ್ಕಾರ ಪರ್ಯಾಯ ಮಾರ್ಗ ಕುರಿತು ಆಲೋಚಿಸಿದೆಯೇ; | ಕರ್ನಾಟಕ ಭೂ ಕಂದಾಯ ಕಾಯ್ದೆ, 1964ರ ಕಲಂ 94–ಎ ರ ಪ್ರಕಾರ ಆಯಾ ವಿಧಾನಸಭಾ ಕ್ಷೇತ್ರವಾರು ಬಗರ್ ಹುಕುಂ ಸಮಿತಿ ರಚಿಸಲು ಅವಕಾಶವಿದ್ದು, ಆ ಮೇರೆಗೆ ಬಗರ್ ಹುಕುಂ ಸಮಿತಿಗಳನ್ನು ರಚಿಸಲಾಗುತ್ತಿದೆ. ಅಂತಹ ಸಮಿತಿಗೆ ಸಂಬಂಧಪಟ್ಟ ವಿಧಾನ ಸಭಾ ಸದಸ್ಯರು ಅಧ್ಯಕ್ಷರಾಗಿದ್ದು, ಮೂವರು ಅಧಿಕಾರೇತರ ನಾಮ ನಿರ್ದೇಶಿತ ಸದಸ್ಯರುಗಳನ್ನು ಒಳಗೊಂಡಿದ್ದು, ಸಂಬಂಧಪಟ್ಟ ತಾಲ್ಲೂಕಿನ ತಹಶೀಲ್ದಾರರು ಸಮಿತಿಯ ಸದಸ್ಯ ಕಾರ್ಯದರ್ಶಿಯಾಗಿರುತ್ತಾರೆ. |

| | | |
|---|---|---|
| ಈ) | ಬಾಕಿ ಉಳಿದಿರುವ ಅರ್ಜಿಗಳನ್ನು ಯಾವ ಕಾಲಮಿತಿಯೊಳಗೆ ಇತ್ಯರ್ಥಪಡಿಸಲು ಸರ್ಕಾರ ಕ್ರಮವಹಿಸುವುದು? | ಬಾಕಿಯಿರುವ ಅರ್ಜಿಗಳನ್ನು ಇತ್ಯರ್ಥಪಡಿಸಲು ದಿನಾಂಕ:26.04.2022 ರವರೆಗೆ ಕಾಲಾವಕಾಶವನ್ನು ವಿಸ್ತರಿಸಲಾಗಿದೆ.<br>ಮುಂದುವರೆದು, ಸರ್ಕಾರದ ಸುತ್ತೋಲೆ ಸಂಖ್ಯೆ:ಆರ್‌ಡಿ 02 ಎಲ್‌ಜಿಪಿ 2021; ದಿ: 30.01.2021 ರ ಸುತ್ತೋಲೆಯಲ್ಲಿ ಬಾಕಿ ಇರುವ ಎಲ್ಲಾ ಅರ್ಜಿಗಳನ್ನು ಶೀಘ್ರವಾಗಿ ಇತ್ಯರ್ಥಪಡಿಸುವಂತೆ ಎಲ್ಲಾ ಜಿಲ್ಲಾಧಿಕಾರಿಗಳಿಗೆ ಕಟ್ಟುನಿಟ್ಟಿನ ಸೂಚನೆಗಳನ್ನು ನೀಡಲಾಗಿದೆ. |

**ಸಂಖ್ಯೆ: ಆರ್‌ಡಿ 53 ಎಲ್‌ಜಿಕ್ಯೂ 2021**

**(ಆರ್.ಅಶೋಕ)**
**ಕಂದಾಯ ಸಚಿವರು.**